# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆಗುರುತಿಲ್ಲದ ಪ್ರಶ್ನೆ ಸಂಖ್ಯೆ : 789
ಸದಸ್ಯರ ಹೆಸರು : ಶ್ರೀ ಪಿ.ಆರ್. ರಮೇಶ್
ಉತ್ತರಿಸಬೇಕಾದ ಸಚಿವರು : ಉಪ ಮುಖ್ಯಮಂತ್ರಿಗಳು ಹಾಗೂ ಸಾರಿಗೆ ಸಚಿವರು
ಉತ್ತರಿಸಬೇಕಾದ ದಿನಾಂಕ : 25-09-2020

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಪ್ರಸ್ತುತ ಕರೋನ ಮಹಾಮಾರಿ ಹಿನ್ನೆಲೆಯಲ್ಲಿ ರಾಜ್ಯದ ಹಲವಾರು ಟ್ಯಾಕ್ಸಿ ಚಾಲಕರು ಮತ್ತು ಆಟೋ ಚಾಲಕರು ಲಾಕ್‌ಡೌನ್ ಪ್ರಕ್ರಿಯೆಯಿಂದ ನಷ್ಟಕ್ಕೊಳಗಾಗಿ ತಮ್ಮ ಕುಟುಂಬದ ದೈನಂದಿನ ಜೀವನ ನಿರ್ವಹಿಸಲು ಸಾಧ್ಯವಾಗದೆ ನಗರಗಳನ್ನು ತೊರೆದು ತಮ್ಮ ಹಳ್ಳಿಗಳಿಗೆ ವಾಪಸ್ ಹೋಗಿರುವ ವಿಷಯ ಸರ್ಕಾರದ ಗಮನಕ್ಕೆ ಬಂದಿದೆಯೇ: | ಸರ್ಕಾರದ ಗಮನಕ್ಕೆ ಬಂದಿರುತ್ತದೆ. |
| ಆ) | ಬಂದಿದ್ದಲ್ಲಿ ಸರ್ಕಾರದಿಂದ ಈ ವರ್ಗಕ್ಕೆ ಯಾವುದಾದರೂ ಪರಿಹಾರ ಧನ ನೀಡಲಾಗಿದೆಯೇ: ನೀಡಿದ್ದಲ್ಲಿ ವಿವರ ನೀಡುವುದು: | ಕೋವಿಡ್-19 ಲಾಕ್‌ಡೌನ್ ಹಿನ್ನೆಲೆಯಲ್ಲಿ, ರಾಜ್ಯದಲ್ಲಿನ ಆಟೋರಿಕ್ಷಾ ಮತ್ತು ಟ್ಯಾಕ್ಸಿ ಚಾಲಕರು ತಮ್ಮ ಆದಾಯವನ್ನು ಕಳೆದುಕೊಂಡಿರುವುದರಿಂದ, ಆಟೋರಿಕ್ಷಾ ಮತ್ತು ಟ್ಯಾಕ್ಸಿ ಚಾಲಕರಿಗೆ ಒಮ್ಮೆ ರೂ.5,000/-ಗಳ ಪರಿಹಾರ ಧನವನ್ನು ಘೋಷಿಸಲಾಗಿದೆ. ಈ ಸಂಬಂಧವಾಗಿ ಸೇವಾಸಿಂಧು ವೆಬ್ ಪೋರ್ಟಲ್ ಮೂಲಕ 2,45,844 ಅರ್ಜಿಗಳು ಸ್ವೀಕೃತವಾಗಿದ್ದು, ಇಲ್ಲಿಯವರೆವಿಗೆ ರೂ.107.05 ಕೋಟಿಗಳ ಅನುದಾನದಲ್ಲಿ 2,15,155 ಫಲಾನುಭವಿಗಳ ಖಾತೆಗೆ ರೂ.5000/-ಗಳಂತೆ ಪರಿಹಾರ ಧನವನ್ನು ಜಮೆ ಮಾಡಲಾಗಿದೆ. |
| ಇ) | ಎಷ್ಟು ಚಾಲಕರಿಗೆ ಮತ್ತು ಎಷ್ಟು ಮೊತ್ತದ ಪರಿಹಾರ ಧನ ನೀಡಲಾಗಿದೆ: (ವರ್ಗವಾರು ವಿವರ ನೀಡುವುದು) | |
| ಈ) | ಪರಿಹಾರ ಧನವನ್ನು ವಿತರಿಸಲು ಯಾವ ಮಾನದಂಡಗಳನ್ನು ಅನುಸರಿಸಲಾಗಿದೆ: (ಸಂಪೂರ್ಣ ವಿವರ ನೀಡುವುದು) | ಆಟೋರಿಕ್ಷಾ ಮತ್ತು ಟ್ಯಾಕ್ಸಿ ಚಾಲಕರಿಗೆ ಮಾತ್ರ ಒಮ್ಮೆ ಪರಿಹಾರವಾಗಿ ರೂ.5,000/- ಗಳ ಪರಿಹಾರ ಧನವನ್ನು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಘೋಷಿಸಲಾಗಿದೆ.<br>1. ಎಲ್ಲಾ ಅರ್ಜಿಗಳು ಸೇವಾ ಸಿಂಧು ಪೋರ್ಟಲ್ ಮೂಲಕವೇ ಸ್ವೀಕೃತವಾಗತಕ್ಕದ್ದು.<br>2. ದಿನಾಂಕ:24-03-2020 ರಂದು ಚಾಲನೆ ಪರವಾನಗಿ ಪ್ರಮಾಣ ಪತ್ರ (Driving License) ಹೊಂದಿರುವ ಆಟೋರಿಕ್ಷಾ ಮತ್ತು ಟ್ಯಾಕ್ಸಿ ಚಾಲಕರಿಗೆ ಮಾತ್ರ ಅನ್ವಯಿಸತಕ್ಕದ್ದು. ದಿನಾಂಕ:24-03-2020 ರಂದು ಚಾಲ್ತಿಯಲ್ಲಿದ್ದ ಚಾಲಕರ ಪರವಾನಗಿ (Driving License) ಸಂಖ್ಯೆಗಿಂತ ಹೆಚ್ಚು ಫಲಾನುಭವಿಗಳಿಲ್ಲದಂತೆ ಖಚಿತಪಡಿಸಿಕೊಳ್ಳತಕ್ಕದ್ದು.<br>3. ಆಧಾರ್ ಕಾರ್ಡ್ / ಚಾಲನಾ ಪರವಾನಗಿ / ವಾಹನ ನೋಂದಣಿ ಸಂಖ್ಯೆ ಮೂರು ಅಂಶಗಳು ಎಲ್ಲಾ ಫಲಾನುಭವಿಗಳಿಗೆ ಅನನ್ಯವಾಗತಕ್ಕದ್ದು. |

| | | |
|---|---|---|
| | | 4. ಆಟೋ ಮತ್ತು ಟ್ಯಾಕ್ಸಿ ಚಾಲಕರಿಗೆ ಮಾತ್ರ ಅನ್ವಯವಾಗತಕ್ಕದ್ದು. ಮ್ಯಾಕ್ಸಿ ಕ್ಯಾಬ್‌ಗಳಿಗೆ ಅನ್ವಯಿಸುವುದಿಲ್ಲ.<br>5. ಪರಿಹಾರ ಧನವು ಕೇವಲ ಚಾಲನೆ ಪರವಾನಗಿ ಪ್ರಮಾಣ ಪತ್ರವನ್ನು (Driving License) ಹೊಂದಿರುವ ಹಾಗೂ ಅಗತ್ಯವಿರುವ ಚಾಲಕರ ಬ್ಯಾಂಕ್ ಖಾತೆಗೆ DBT ಮುಖಾಂತರವೇ ಸಂದಾಯವಾಗಬೇಕು.<br>6. ಒಂದು ವೇಳೆ ಆಟೋ / ಟ್ಯಾಕ್ಸಿ ಮಾಲೀಕರಿಗೆ ಸಂದಾಯವಾದಲ್ಲಿ ಕೆಲವೊಂದು ಮಾಲೀಕರು ಹೆಚ್ಚಿನ ಸಂಖ್ಯೆಯ ಆಟೋ / ಟ್ಯಾಕ್ಸಿಗಳನ್ನು ಹೊಂದಿದ್ದು, ಅವರಿಗೆ ಪರಿಹಾರ ಧನ ಸಂದಾಯವಾದಲ್ಲಿ ಜೀವನ ನಿರ್ವಹಣೆಯನ್ನು ಎದುರಿಸುತ್ತಿರುವ ಚಾಲಕರಿಗೆ ಸಿಗದಂತೆಯಾಗುತ್ತದೆ. ಆದುದರಿಂದ Duplication or double payment ಆಗದಂತೆ, ಅವರುಗಳ ಆಧಾರ್/ಪ್ಯಾನ್ ಕಾರ್ಡ್ ಬ್ಯಾಂಕ್ ಖಾತೆಗೆ ಅನನ್ಯವಾಗಿ ಲಿಂಕ್ ಆಗಿರುವ ಬಗ್ಗೆ ಗಮನಹರಿಸಿ ವರ್ಗಾಯಿಸತಕ್ಕದ್ದು.<br>ಈ ಹಂತದಲ್ಲಿ ಸರ್ಕಾರ ಮತ್ತು ಫಲಾನುಭವಿಗಳ ನೇರ ಸಂಪರ್ಕವಿರತಕ್ಕದ್ದು. ಯಾವುದೇ ಮಧ್ಯಂತರ ಸಂಪರ್ಕ ಇರಬಾರದು. |
| ಉ) | ವಲಸೆ ಹೋಗಿರುವ ಈ ವರ್ಗದ ಕುಟುಂಬಗಳನ್ನು ಮರಳಿ ವಾಪಸ್ ಕರೆತರಲು ಸರ್ಕಾರ ಚಿಂತನೆ ನಡೆಸಿದೆಯೇ? (ವಿವರ ನೀಡುವುದು) | ಇಂತಹ ಯಾವುದೇ ಪ್ರಸ್ತಾವನೆ ಪರಿಶೀಲನೆಯಲ್ಲಿರುವುದಿಲ್ಲ. |

ಟಿಡಿ 74 ಟಿಡಿಕ್ಯೂ 2020

(ಲಕ್ಷ್ಮಣ ಸಂಗಪ್ಪ ಸವದಿ)
ಉಪ ಮುಖ್ಯಮಂತ್ರಿಗಳು ಹಾಗೂ
ಸಾರಿಗೆ ಸಚಿವರು